# ಕರ್ನಾಟಕ ವಿಧಾನ ಪರಿಷತ್ತು

1 ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 115

2 ಸದಸ್ಯರ ಹೆಸರು : ಶ್ರೀ ಯು.ಬಿ. ವೆಂಕಟೇಶ್ (ನಾಮ ನಿರ್ದೇಶನ ಹೊಂದಿದವರು)

3 ಉತ್ತರಿಸುವ ದಿನಾಂಕ : 23-09-2021

4 ಉತ್ತರಿಸುವವರು : ಮುಖ್ಯಮಂತ್ರಿಗಳು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೆಂಗಳೂರು-ಮೈಸೂರು ರಸ್ತೆಯ ಕೆಂಗೇರಿ ಬಳಿ ವೃಷಭಾವತಿ ನದಿಗೆ ನಿರ್ಮಿಸಿದ್ದ ತಡೆಗೋಡೆ ಕುಸಿತ ದಿಂದಾಗಿ ಸಾರ್ವಜನಿಕರ ಸುಗಮ ಸಂಚಾರಕ್ಕೆ ಅಡಚಣೆ ಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ | ಬಂದಿದ್ದಲ್ಲಿ, ಕಳೆದ ಎರಡು ವರ್ಷಗಳಿಂದ ತಡೆಗೋಡೆ ನಿರ್ಮಾಣ ಕಾಮಗಾರಿ ನಿಧಾನಗತಿಯಲ್ಲಿ ಸಾಗಲು ಕಾರಣಗಳೇನು; | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಬರುವ ಬೆಂಗಳೂರು ಮೈಸೂರು ರಸ್ತೆಯ ಕೆಂಗೇರಿ ಬಳಿ ವೃಷಭಾವತಿ ನದಿಗೆ 2003-04 ರಲ್ಲಿ ಅಲ್ಲಿನ ನಗರ ಸಭೆ ವತಿಯಿಂದ ನಿರ್ಮಿಸಲಾಗಿದ್ದ ತಡೆಗೋಡೆಯು ದಿನಾಂಕ: 25-06-2020 ರಂದು ಬಿದ್ದ ಭಾರಿ ಮಳೆಯಿಂದ ಕುಸಿತವಾಗಿರುತ್ತದೆ. ಸದರಿ ತಡೆಗೋಡೆ ನಿರ್ಮಾಣ ಕಾಮಗಾರಿಗೆ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಸಂಪನ್ಮೂಲವನ್ನು ಕ್ರೋಢೀಕರಿಸಿಕೊಂಡು ರೂ.19.20 ಕೋಟಿಗಳ ಅಂದಾಜು ವೆಚ್ಚದಲ್ಲಿ ದಿನಾಂಕ: 03-08-2020 ರಂದು ಟೆಂಡರ್ ಕರೆದು ಕಾಮಗಾರಿಯನ್ನು ಪ್ರಾರಂಭಿಸಲಾಗಿರುತ್ತದೆ. ಸದರಿ ನಾಲೆಯಲ್ಲಿ ಬಹುತೇಕ ಪ್ರತಿದಿನ ನೀರಿನ ಹರಿವು ಹೆಚ್ಚಿಗೆ ಇರುವುದರಿಂದ ತಳಪಾಯವನ್ನು ನಿರ್ಮಿಸಲು ಹೆಚ್ಚಿನ ಕಾಲಾವಕಾಶ ತೆಗೆದುಕೊಳ್ಳಲಾಗಿರುತ್ತದೆ.<br><br>ಸದರಿ ತಡೆಗೋಡೆಯೊಂದಿಗೆ ದುಬಾಸಿಪಾಳ್ಯ ಕೆರೆಯಿಂದ ಬರುವ ರಾಜಕಾಲುವೆಗೆ ಬೆಂಗಳೂರು ಮೈಸೂರು ಹೆದ್ದಾರಿಯಲ್ಲಿ ಸೇತುವೆಯನ್ನು ಸಹ ಹೊಸದಾಗಿ ನಿರ್ಮಾಣ ಮಾಡಲು ಕ್ರಮ ಕೈಗೊಂಡಿರುವ ಹಿನ್ನೆಲೆಯಲ್ಲಿ, ಕಾಮಗಾರಿಗೆ ಮತ್ತಷ್ಟು ಕಾಲಾವಕಾಶ ತಗಲುತ್ತಿದ್ದು, ಪ್ರಸ್ತುತ ಸದರಿ ಕಾಮಗಾರಿಯು ಪ್ರಗತಿಯಲ್ಲಿರುತ್ತದೆ. |

| | | |
|---|---|---|
| ಇ | ಇದರಿಂದ ವಾಹನ ಸಂಚಾರಕ್ಕೆ ಅಡಚಣೆಯುಂಟಾಗಿದ್ದು, ತ್ವರಿತಗತಿಯಲ್ಲಿ ಕಾಮಗಾರಿ ಮುಕ್ತಾಯಗೊಳಿಸಲು ಕ್ರಮ ಕೈಗೊಳ್ಳಲಾಗುವುದೇ? | ಪ್ರಸ್ತುತ ತಡೆಗೋಡೆ ನಿರ್ಮಾಣ ಕಾಮಗಾರಿಯು ಪ್ರಗತಿಯಲ್ಲಿದ್ದು, ಸದರಿ ತಡೆಗೋಡೆಯ ಒಟ್ಟು ಉದ್ದ 210.0 ಮೀ. ಆಗಿರುತ್ತದೆ. ಈಗಾಗಲೇ 180.0 ಮೀ. ಗಳಷ್ಟು ತಡೆಗೋಡೆ ಕಾಮಗಾರಿಯನ್ನು ಪೂರ್ಣಗೊಳಿಸಲಾಗಿದ್ದು, ಬಾಕಿ 30.0 ಮೀ. ತಡೆಗೋಡೆಯನ್ನು ಸೇತುವೆ ನಿರ್ಮಾಣದೊಂದಿಗೆ ಜೋಡಿಸಲಾಗುತ್ತದೆ.<br><br>ಸದರಿ ಸೇತುವೆ ನಿರ್ಮಾಣ ಕಾಮಗಾರಿಯು ತ್ವರಿತಗತಿಯಲ್ಲಿ ಮುಂದುವರೆದಿದ್ದು, ಬೆಂಗಳೂರು ಮೆಟ್ರೋ ರೈಲ್ ನಿಗಮ ನಿಯಮಿತ ಸಂಸ್ಥೆಯ ಮೆಟ್ರೋ ರೈಲು ಹಳಿ ಸಹ ಈ ಪ್ರದೇಶದಲ್ಲಿ ಹಾದುಹೋಗುತ್ತಿದ್ದು, ಸೇತುವೆ ನಿರ್ಮಾಣ ಸಂಬಂಧ ಬಿ.ಎಂ.ಆರ್.ಸಿ.ಎಲ್‌ನ ಅನುಮತಿ ಸಹ ಅವಶ್ಯವಿದ್ದುದರಿಂದ, ಅನುಮತಿಯನ್ನು ಪಡೆದು ಕಾಮಗಾರಿಯನ್ನು ಮುಂದುವರೆಸಲಾಗಿದೆ. ಸದರಿ ಸೇತುವೆಯ ಒಂದು ಭಾಗದ ನಿರ್ಮಾಣವನ್ನು ದಿನಾಂಕ: 30–10–2021 ರಂದು ಪೂರ್ಣಗೊಳಿಸಲು ಕ್ರಮಕೈಗೊಳ್ಳಲಾಗಿರುತ್ತದೆ. ಮತ್ತೊಂದು ಭಾಗದಲ್ಲಿ ಸಂಚಾರ ಬದಲಿಯಾದ ನಂತರ ಉಳಿದ ಭಾಗದ ಸೇತುವೆ ನಿರ್ಮಿಸಲು ಕ್ರಮಕೈಗೊಳ್ಳಲಾಗುತ್ತದೆ. ಸದರಿ ಸೇತುವೆ ನಿರ್ಮಾಣ ಯೋಜನೆಯನ್ನು ದಿನಾಂಕ: 31-12–2021 ರೊಳಗೆ ಪೂರ್ಣಗೊಳಿಸಿ, ವಾಹನ ಸಂಚಾರಕ್ಕೆ ಅನುವು ಮಾಡಿಕೊಡಲು ಉದ್ದೇಶಿಸಲಾಗಿರುತ್ತದೆ. |

ಸಂಖ್ಯೆ: ನಅಇ 271 ಎಂಎಸ್‌ವೈ 2021 (ಇ)

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ